# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1397
ಸದಸ್ಯರ ಹೆಸರು : ಡಾ: ತೇಜಸ್ವಿನಿ ಗೌಡ
ಉತ್ತರಿಸುವ ದಿನಾಂಕ : 24-12-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಪ್ರಸ್ತುತ ರಾಜ್ಯದಲ್ಲಿರುವ ಅಸ್ಪೃಶ್ಯತಾ ನಿವಾರಣೆಗೆ ಇರುವ ಕಾನೂನುಗಳ ಉಪಯುಕ್ತವಾಗಿವೆಯೇ;<br>ಕಳೆದ ಮೂರು ವರ್ಷಗಳಿಂದ ಎಷ್ಟು ಪ್ರಮಾಣದ ಅಸ್ಪೃಶ್ಯತಾ ಪಾಲನೆ ಪ್ರಕರಣ ದಾಖಲಾಗಿವೆ;<br>ನಿಗ್ರಹದಳದಿಂದ ಎಷ್ಟು ಪ್ರಕರಣ ದಾಖಲಾಗಿದೆ;</td><td>ಹೌದು<br>ಕಳೆದ ಮೂರು ವರ್ಷಗಳಿಂದ ಅಸ್ಪೃಶ್ಯತಾ ಪಾಲನೆಯಾದ ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಲಾಗಿದೆ.<br>ನಾಗರಿಕ ಹಕ್ಕು ಸಂರಕ್ಷಣಾ ಕಾಯ್ದೆ 1955ರಡಿ ದಾಖಲಾದ ಪ್ರಕರಣಗಳ ಅಂಕಿ ಅಂಶ ಕೆಳಕಂಡಂತಿದೆ.<br><table><tr><th>ಕ್ರ.ಸಂ.</th><th>ಜಿಲ್ಲೆಯ ಹೆಸರು</th><th>2019</th><th>2020</th><th>2021</th></tr><tr><td>1</td><td>ಯಾದಗಿರಿ</td><td>1</td><td>1</td><td>0</td></tr><tr><td>2</td><td>ರಾಯಚೂರು</td><td>0</td><td>0</td><td>1</td></tr><tr><td>3</td><td>ಕೊಪ್ಪಳ</td><td>7</td><td>1</td><td>5</td></tr><tr><td>4</td><td>ಚಿಕ್ಕಮಗಳೂರು</td><td>2</td><td>3</td><td>1</td></tr></table></td></tr>
<tr><td>ಆ)</td><td>ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಬುಡಕಟ್ಟು ಜನಾಂಗಗಳ ಸಮಾಜದ ಮುಖ್ಯ ವಾಹಿನಿಗೆ ತರುವ ಯಾವ್ಯಾವ ಯೋಜನೆ ಪರಿಣಾಮಕಾರಿಯಾಗಿವೆ;<br>ಸಂಪೂರ್ಣ ಅಸಮಾನ್ಯತೆ ನಿವಾರಣೆಗೆ ಇನ್ನು ಹೆಚ್ಚಿನ ಕಾನೂನು ರೂಪಿಸುವುದು ಅವಶ್ಯವಿದೆಯೇ;</td><td>ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಬುಡಕಟ್ಟು ಜನಾಂಗದವರನ್ನು ಸಮಾಜದ ಮುಖ್ಯ ವಾಹಿನಿಗೆ ತರಲು ಶೈಕ್ಷಣಿಕ, ಸಾಮಾಜಿಕ ಸಬಲೀಕರಣ, ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳು ಹೆಚ್ಚು ಪರಿಣಾಮಕಾರಿಯಾಗಿವೆ. ಸಮಾಜ ಕಲ್ಯಾಣ ಇಲಾಖೆಯಿಂದ ರೂಪಿಸಿರುವ ಕಾರ್ಯಕ್ರಮಗಳು/ಯೋಜನೆಗಳ ಮಾಹಿತಿಯನ್ನು ಅನುಬಂಧ-2 ರಲ್ಲಿ ನೀಡಲಾಗಿದೆ.<br>ಅಭಿವೃದ್ಧಿ ಆಯವ್ಯಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಜನಸಂಖ್ಯೆಗೆ ಅನುಗುಣವಾಗಿ ಅನುದಾನವನ್ನು ಹಂಚಿಕೆ ಮಾಡಲು ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಕಾಯ್ದೆ 2013 ನ್ನು ಜಾರಿಗೆ ತರಲಾಗಿದೆ. ಅದರಂತೆ ವಿವಿಧ ಅಭಿವೃದ್ಧಿ ಇಲಾಖೆಗಳಿಗೆ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಡಿ ಅನುದಾನ ಹಂಚಿಕೆ ಮಾಡಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.</td></tr>
<tr><td>ಇ)</td><td>ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ವರ್ಗಗಳ ವಿರುದ್ಧ ದೌರ್ಜನ್ಯ ತಡೆಯುವ ನಿಟ್ಟಿನಲ್ಲಿ ಸಮಾಜದ ವಿವಿಧ ಸ್ತರಗಳಲ್ಲಿ ಯಾವ ರೀತಿಯ ಜಾಗೃತಿ ಕಾರ್ಯಕ್ರಮವನ್ನು ಜಾರಿಗೊಳಿಸಲಾಗಿದೆ;</td><td>ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ವರ್ಗಗಳ ವಿರುದ್ಧ ದೌರ್ಜನ್ಯ ತಡೆಯುವ ನಿಟ್ಟಿನಲ್ಲಿ ಜಾಗೃತಿ ಕಾರ್ಯಕ್ರಮಗಳನ್ನು ಜಾರಿಗೊಳಿಸಿರುವ ಬಗ್ಗೆ ಅನುಬಂಧ-3 ರಲ್ಲಿ ನೀಡಲಾಗಿದೆ.</td></tr>
</table>

| | | |
|---|---|---|
| ಈ) | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮಹಿಳೆಯರ ಮೇಲೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಜನಾಂಗದಿಂದಲೇ ನಡೆಯುತ್ತಿರುವ ದೌರ್ಜನ್ಯ ಪ್ರಕರಣಗಳ ಅಂಕಿ ಅಂಶ ದಾಖಲೆ ನೀಡುವುದು? | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮಹಿಳೆಯರ ಮೇಲೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಜನಾಂಗದಿಂದಲೇ ನಡೆಯುತ್ತಿರುವ ದೌರ್ಜನ್ಯ ಪ್ರಕರಣಗಳ **ವಿವರವನ್ನು ಅನುಬಂಧ-4 ರಲ್ಲಿ ನೀಡಲಾಗಿದೆ.** |

ಸಕಇ 85 ಎಸ್‌ಪಿಎ 2021

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಮತ್ತು ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು